ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 15 ನೇ ಡಿಸೆಂಬರ್, 2020

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯಲ್ಲಿನ ವ್ಯವಸ್ಥೆಯ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) –

707 (850) ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದಲ್ಲಿ 2011ನೇ ಸಾಲಿನಿಂದ ಇಲ್ಲಿಯವರೆಗೆ Integrated Lease Management System ಅಡಿಯಲ್ಲಿ ಒಟ್ಟು ಎಷ್ಟು ಈ-ಪರವಾನಿಗೆ (E-permit) ಯನ್ನು ನೀಡಲಾಗಿದೆ; (ಜಿಲ್ಲಾವಾರು ವಿವರ ನೀಡುವುದು)

(ಆ) ಈ-ಪರವಾನಿಗೆ (E-permit) ತೆಗೆದುಕೊಳ್ಳದೇ ಅನಧಿಕೃತವಾಗಿ ಗಣಿಗಾರಿಕೆ ನಡೆಸುತ್ತಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪ್ರಕರಣಗಳ ಸಂಖ್ಯೆ ಎಷ್ಟು; ಹಾಗೂ ಕ್ರಮ ಕೈಗೊಂಡಿರುವ ಪ್ರಕರಣಗಳ ಜಿಲ್ಲಾವಾರು ವಿವರ ನೀಡುವುದು;

(ಇ) ಈ-ಪರವಾನಿಗೆ (E-permit) ತೆಗೆದುಕೊಂಡಿರುವ ಅರ್ಜಿದಾರರಲ್ಲಿ ಪರಿಸರ ಮಾಲಿನ್ಯ ಹಾಗೂ ಇತರೆ ಇಲಾಖೆಗಳ ವತಿಯಿಂದ ಅನುಮತಿ ಅಥವಾ Consent for Establishment (CFE) ಹಾಗೂ Consent for Operation (CFO) ತೆಗೆದುಕೊಂಡಿರುವ ಮತ್ತು ತೆಗೆದುಕೊಳ್ಳದೇ ಇರುವವರ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು)

(ಈ) ಈ-ಪರವಾನಿಗೆ (E-permit) ತೆಗೆದುಕೊಂಡಿರುವ ಅರ್ಜಿದಾರರ ನಿವೇಶನಗಳಲ್ಲಿ GIS/GPS ವ್ಯವಸ್ಥೆ ಅಳವಡಿಸಿಕೊಳ್ಳಲಾಗಿದೆಯೇ; ಅಳವಡಿಸಿಕೊಂಡಿದ್ದಲ್ಲಿ ಈ ವ್ಯವಸ್ಥೆಯ ಮೇಲ್ವಿಚಾರಣೆಯನ್ನು ಯಾರು ಮಾಡುತ್ತಿದ್ದಾರೆ; (ವಿವರ ನೀಡುವುದು)

(ಉ) E-governance ಇಲಾಖೆಯಡಿಯಲ್ಲಿ ನಿಯಂತ್ರಣ ಮಾಡಲಾಗುತ್ತಿದೆಯೇ; ಇ-ಹರಾಜು (E-action) and ಇ-ಸಾರಿಗೆ (E-Transportation) ವ್ಯವಸ್ಥೆಯಡಿಯಲ್ಲಿ ಎಷ್ಟು ವಹಿವಾಟು ಆಗಿದೆ; (ಜಿಲ್ಲಾವಾರು ವಿವರ ನೀಡುವುದು)

(ಊ) Stake Holders Roles and Responsibilities ಪ್ರಕಾರ ವ್ಯವಸ್ಥೆಯು ಕಾರ್ಯಗತವಾಗಿದೆಯೇ? (ವಿವರ ನೀಡುವುದು)